ಕಲ್ಲನಗೌಡ ತಿಪ್ಪನಗೌಡ ಪಾಟೀಲ *

# ಅಪರೂಪದ ನಂದಿ ವಿಗ್ರಹ

ಧಾರವಾಡ ಜಿಲ್ಲೆಯ ಗದಗ ತಾಲೂಕಿನ ಬೆಳಧಡಿ ಗ್ರಾಮದಲ್ಲಿ ಇರುವಂತಹ ನೀರಿನ ಚಿಕ್ಕ ಕೆರೆಗೆ ಹೊಂದಿಕೊಂಡಂತಹ .ಗದಗ ಮಾರ್ಗದ ಪಕ್ಕದಲ್ಲಿ ಈ ಶಿಲ್ಪವಿದೆ.

ಇದು ಎಷ್ಟೋ ವರುಷಗಳಿಂದ ತನ್ನ ಅಂದವನ್ನು ಕಳೆದುಕೊಂಡು ಅನಾಥವಾಗಿ ಕಲ್ಲುವಡ್ಡಿನಲ್ಲಿ ಸಿಕ್ಕಿಕೊಂಡ ಪ್ರಾಚೀನ ಶಿಲಾಶಿಲ್ಪ. ಇದನ್ನು ನೋಡಲಾಗಿ ಮಾರುತಿರಾಯನೆಂಬ ಹಾಗೆ ಕಾಣಿಸಿಕೊಳ್ಳುತ್ತದೆ. ಇಲ್ಲಿ ಸಮಿಪದಲ್ಲಿ ಇರತಕ್ಕ ಕಲ್ಯಾಣ ಚಾಲುಕ್ಯರ ೧೨ನೇ ಶತಮಾನದ ಕೆಲವು ಅವಶೇಷಗಳನ್ನು ನೋಡಲಾಗಿ ಇದು ಕೂಡಾ ಅಂದಿನ ಕಾಲದ್ದೆಂದು ಹೇಳಬೇಕಾಗುತ್ತದೆ. ಯಾಕೆಂದರೆ ಊರ ಮಧ್ಯೆ ಇರುವ[1] ಈಶ್ವರ ದೇವಾಲಯವು ೧೧ನೇ ಶಮಾನದ್ದೆಂದು ಇತಿಹಾಸ ತಜ್ಞರು ಊಹಿಸಿದ್ದಾರೆ.[1] ಕಾರಣ ಅದೇ ಈಶ್ವರನ ಮುಂದೆ ಬಸವೇಶನು ಇರತಕ್ಕವನೇ. ಈತನ ಈ ಆಕಾರ ಚಿತ್ರವನ್ನು ಶಿಲ್ಪಿ ಕೆತ್ತಿ ಯುದ್ಧ ಯೋಧನನ್ನು ಮಾಡಿ ನಿಲ್ಲಿಸಿದ್ದಾನೆ.

## ವಿಗ್ರಹದ ವರ್ಣನೆ

ಕಲ್ಲು ಕಪ್ಪು ಹಸಿರು ಮಿಶ್ರಿತವಾದ ಮೃದು ಶಿಲೆಯಾಗಿದೆ. ಉದ್ದವು ೫ ಅಡಿ ಇದ್ದು ೪ ಅಡಿ ಅಗಲವಾಗಿದೆ. ಶಿಲ್ಪವು ಓಡುವ ಭಂಗಿಯಲ್ಲಿ ಇದ್ದು ಒಳ್ಳೆ ಚಿತ್ರವಿಚಿತ್ರವಾಗಿದ್ದು ಪ್ರಭಾವಳಿ ತ್ರುಟಿತವಾಗಿದ್ದರೂ ವಿಗ್ರಹವು ಚೆನ್ನಾಗಿ ಇದೆ. ಅದರ ಮೋರೆ ಮಾತ್ರ ಒಡೆದು ಹಾಕಿದ್ದಾರೆ. ಮಾರುತಿ ಹಾಗೆ ಎದ್ದು ನಿಂತ ಭಂಗಿಯಲ್ಲಿ ಓಡುವ ರೀತಿಯಲ್ಲಿ ಇದ್ದು ಎಡಗಾಲಿನಿಂದ ಒಬ್ಬ ವೈರಿಯನ್ನು ಮೆಟ್ಟಿ ಸಂಹಾರ ಮಾಡಿದ ರೀತಿಯಲ್ಲಿ ಇದೆ. ಇನ್ನು ಬಲಕಾಲು V ಆಕಾರ ಉಳ್ಳದ್ದಾಗಿದ್ದು ಓಡುವ ರೀತಿ ಇದೆ. ಎಡ ಭಾಗಕ್ಕೆ ಹೊರಳಿನಿಂತು ಬಲಕ್ಕೆ ಮೇಲಕ್ಕೆ ಮಾಡಿ ಹೆಬ್ಬೆರಳು ಮುದುಡಿಕೊಂಡು ರುದ್ರಾಕ್ಷಿ ಸರ ಜಪಮಾಲೆ ಹಿಡಿದುಕೊಂಡು ಅಭಯ ಹಸ್ತವನ್ನು ತೋರಿಸಿದ್ದಾನೆ. ಎಡಕೈಯನ್ನು ಡೊಂಕಾಗಿ ಮಾಡಿ ಕೈಯಲ್ಲಿ ಆಯುಧ ಹಿಡಿದುಕೊಂಡ ಹಾಗೆ ಇದೆ. ಇದು ತ್ರುಟಿತವಾಗಿದೆ. ಮೋರೆಯು ಎಡಕ್ಕೆ ಹೊರಳಿ ನಿಂತಭಾವದಲ್ಲಿ ಇದೆ. ತಲೆ ಮೇಲೆ ಎರಡು ಕೊಂಬುಗಳು ಹಿಂದಕ್ಕೆ ಬಾಚಿವೆ.[2] ನಮ್ಮ ರೈತರು ಇದಕ್ಕೆ 'ಗುಂಡ ಬಸವಣ್ಣ' ಎನ್ನುತ್ತಾರೆ. ಕಿವಿಗಳು ಚಿಕ್ಕ ಆಕಳ ಕಿವಿಯ ಆಕಾರದಲ್ಲಿದ್ದು ಕಿವಿಯೊಳಗೆ ಚಿಕ್ಕ ರುದ್ರಾಕ್ಷಿ ಸರಗಳ ಗೊಂಚಲನ್ನು ಕಟ್ಟಲಾಗಿದೆ. ಕುತ್ತಿಗೆ ಗಗ್ಗರಿಯಾಕಾರವಾಗಿ ಇದ್ದು ರುದ್ರಾಕ್ಷಿ ಸರವನ್ನು ಕಟ್ಟಲಾಗಿದೆ. ಅದರಂತೆ ಕೊರಳಿನಿಂದ ಎದೆಯವರೆಗೆ ಕೆಲವು ಮುತ್ತಿನ ಸರದ ಮಧ್ಯೆ ಲಿಂಗಾಕಾರದ ವಸ್ತು ಶೋಭಿಸುತ್ತಿದೆ. ಹಾಗೂ ಕೊರಳಿನಿಂದ ಹೊಟ್ಟೆಯವರೆಗೆ ರುದ್ರಾಕ್ಷಿಯ ದೊಡ್ಡ ಆಕಾರದ ಜೋಡುಸರಗಳು ಸುಂದರವಾಗಿ ಕಾಣಿಸುತ್ತವೆ. ಕೈಗಳ ಮುಂದಿನ ಭಾಗ ಹಾಗು ರಟ್ಟೆಗಳಿಗೆ ರುದ್ರಾಕ್ಷಿ ಸರಗಳನ್ನು ಸುತ್ತಲಾಗಿದೆ. ನಡಕ್ಕೆ ಒಂದು ಚಿಕ್ಕಪಟ್ಟಿ, ಅದು ಪೈಲವಾನರ ಚಡ್ಡಿ ಹೋಲುತ್ತದೆ. ಅದಕ್ಕೆ ಪಕ್ಕದಲ್ಲಿ ಚಿಕ್ಕ ಕಠಾರಿ ಧರಿಸಿರುತ್ತಾನೆ. ಕಾಲುಗಳ ಹಿಂಬದಿ ಮೇಲ್ಭಾಗ ಕಡಗ, ಕಡಗಕ್ಕೆ ಗೆಜ್ಜೆಕಟ್ಟಲಾಗಿದೆ. ಈತನ ಬಾಲವಂತೂ

---

* ಬೆಳಧಡಿ, ಗದಗ ತಾ||, ಧಾರವಾಡ ಜಿಲ್ಲೆ.

1 ಕರ್ನಾಟಕ ಗ್ಯಾಜೆಟರ್, ಇತಿಹಾಸ ಭಾಗ ೩, ೧೯೭೫ (ಬೆಳಧಡಿ ನೋಡಿರಿ).

2 ಜಾನಪದ ಸುಗ್ಗಿಹಾಡಿನಲ್ಲಿ ಬರುತ್ತೆ. ನಮ್ಮ ಪೂರ್ವಜರು ಸುಗ್ಗಿಕಾಲದಲ್ಲಿ ಹಾಡುತ್ತಿದ್ದರು.

ಹಿಂಭಾಗದಿಂದ ಸಾಗಿ ಮೇಲ್ಭಾಗಕ್ಕೆ ಪ್ರಭಾವಳಿಯವರೆಗೂ ಹೋಗಿದೆ. ಗಂಟೆಯನ್ನು ತುದಿಬಾಲಕ್ಕೆ ಕಟ್ಟಲಾಗಿದೆ. ಬಾಲದಲ್ಲಿ ಈಶ್ವರ ಲಿಂಗಗಳ ಚಿತ್ರಗಳು. ತುದಿಯವರೆಗೂ ಸಾಲುಸಾಲಾಗಿ ವಿಚಿತ್ರವಾಗಿ ಕೆತ್ತಲಾಗಿದೆ. ಈತನ ಬಲ ಭುಜದಲ್ಲಿ ಹಕ್ಕಿ ಚಿತ್ರವಿದ್ದು ಇದರ ಪಕ್ಕಕ್ಕೆ ಮೇಲ್ಭಾಗಕ್ಕೆ ನಾಗರಹಾವಿನ ಹೆಡೆ ಕಂಡುಬರುತ್ತದೆ.

ಕಣ್ಣುಗಳು ಚಿಕ್ಕವಾಗಿದ್ದು ಮಾನವರ ಕಣ್ಣುಗಳನ್ನೇ ಹೋಲುತ್ತದೆ. ಕೈ ಹಾಗು ಕಾಲುಗಳು ಸುಂದರವಾಗಿ ನುಣುಪಾಗಿ ಕೆತ್ತಲಾಗಿದೆ. ಇಲ್ಲಿನಂದೀಶನು ತನ್ನ ಎಡಗಾಲಿನಿಂದ ಮೆಟ್ಟಿದ ಶಿಲ್ಪ ತಲಕೆಳಗಿದ್ದು ಶಿಂಶುಮಾರನದಾಗಿದೆ. ನಂದೀಶನು ಜಂಬಾಸುರ ಹಾಗೂಶಿಂಶುಮಾರರೆಂಬ ರಾಕ್ಷಸರನ್ನು ಸಂಹಾರಮಾಡಿದ ನೆಂದು ತಿಳಿದುಬರುತ್ತದೆ. ಈ ಮೆಟ್ಟಿದ ವಿಗ್ರಹಕ್ಕೆ ಎರಡು ನಾಯಿಗಳು ಎಡಬಲಕ್ಕೆ ಇದ್ದು ತಲೆ ಕೆಳಗೆ ಇದ್ದು ಇವನನ್ನೇ ಕಚ್ಚಿದ ರೀತಿಯಲ್ಲಿ ಇರುತ್ತದೆ.

ಈ ಪುರಾಣಕಥೆಯ ಚಿರಸ್ಮರಣೆ[3] ಸಲುವಾಗಿ ಈ ನಂದೀಶ ಮೂರ್ತಿಯನ್ನು ಕೆತ್ತಲಾಗಿರಬಹುದೆಂದು ಊಹಿಸಲಾಗಿದೆ. ಅದರಂತೆ ಈ ನಂದಿ ವಿಗ್ರಹದ ಹಿಂದೆ ಚಿತ್ರಗಳನ್ನು ಬಿಡಿಸಲಾಗಿದೆ. ಅವುಗಳ ವಿವರ : (೧) ಈಶ್ವರ ಲಿಂಗವಿದ್ದು ಇದರ ಮುಂದೆ ಬಸವಣ್ಣನ ಭಾವಚಿತ್ರ ಕೂಡಾ ಇದೆ. ಮೊದಲು ಹೇಳಿದ ನಂದೀಶನು ಬಾಲಬಸವನಾಗಿ ಕೈಯಲ್ಲಿ ಗಂಟೆ ಹಾಗೂ ದೂಪಾರತಿಗಳನ್ನು ಹಿಡಿದುಕೊಂಡು ಭಕ್ತಿಭಾವವುಳ್ಳವನಾಗಿ ಲಿಂಗಪೂಜೆ ಮಾಡಲು ಸಿದ್ಧನಾಗಿದ್ದಾನೆ. ಈ ಉಬ್ಬು ಶಿಲ್ಪದಲ್ಲಿ ರೇಖಾಚಿತ್ರಗಳು ಇವೆ. (೨) ಇದೇ ನಂದೀಶನು ವೀರಯೋಧನಾಗಿ ಗಜಾರೂಢನಾಗಿ ಬಲಕೈಯಲ್ಲಿ ತ್ರಿಶೂಲಧಾರಿಯಗಿ ಜಂಭಾಸುರನನ್ನು ತ್ರಿಶೂಲದಿಂದ ಎದೆಗೆ ತಿವಿದು ಕೆಡವಿ ಸಂಹಾರ ಮಾಡಿರುತ್ತಾನೆ. ಈತನ ಎಡಬಲಕ್ಕೆ ಸೂರ್ಯ ಚಂದ್ರರ ಕಲ್ಲಾಮೆಗಳ ಚಿತ್ರವಿದ್ದು ಪಕ್ಕದಲ್ಲಿ ಇರುತ್ತವೆ. ಹಾಗು ಈ ಚಿತ್ರಗಳ ಪಕ್ಕದಲ್ಲಿ ಕುಳಿತ ಭಂಗಿಯಲ್ಲಿ ಜೈನ ತೀರ್ಥಂಕರ ಶಿಲ್ಪ ಇದ್ದು ಇದು ಕೂಡಾ ಸುಂದರವಾಗಿದೆ.

ಬೆಳಧಡಿಯಲ್ಲಿ ಇರುವಂಥಾ ಇತರ ಅವಶೇಷಗಳನ್ನು ನೋಡಿದರೆ ಇದು ಒಂದು ಪ್ರಾಚೀನ ಕ್ಷೇತ್ರವೆಂದೇ ಹೇಳಬೇಕಾಗುತ್ತದೆ. ಈಗಲೂ ಈ ಬಾಲ ಬಸವನ ಗುಡಿ ಇದ್ದು ಹೊಸದಾಗಿ ನಿರ್ಮಿಸಲಾಗಿದೆ. ಇಲ್ಲಿ ವೃಷಭಾರೂಢ ಬಸವಣ್ಣದ ಶಿಲ್ಪ ಇದ್ದು ವೀರಕಲ್ಲು, ನಾಗರಹಾವಿನ ಶಿಲಾಶಿಲ್ಪ ಕೂಡಾ ಇರುತ್ತದೆ. ಸದ್ಯ ಈ ಗುಡಿಯನ್ನು ಬೈಲ ಬಸವೇಶನೆಂದು ಕರೆಯಲಾಗುತ್ತದೆ. ಊರ ಮಧ್ಯೆ ಈಶ್ವರ ದೇವಾಲಯವಿದ್ದು ಅದು ಕಲ್ಯಾಣ ಚಾಲುಕ್ಯರ ಕಾಲದ್ದು. ಈ ಗುಡಿ ಮುಂದೆ ಮತ್ತೊಂದು ಗುಡಿ ನೂರು ವರುಷಗಳ ಹಿಂದೆ ಗುರುಬ್ರಹ್ಮಾನಂದರು ಬಂದು ಇಲ್ಲಿ ಒಂದು ರಾಮ ಮಂದಿರವನ್ನು ಸ್ಥಾಪನೆ ಮಾಡಿದ್ದಾರೆ. ಗರ್ಭಗುಡಿ ಯಲ್ಲಿ ಬಿಲ್ವೇಶ್ವರನಿದ್ದು ನಂದಿ ಮಂಟಪದಲ್ಲಿ ರಾಮ ಸೀತಾ ಲಕ್ಷ್ಮಣರ ಮೂರ್ತಿ ಪ್ರತಿಷ್ಠಾಪನೆ ಮಾಡಲಾಗಿದೆ.

(ನನ್ನ ಶೋಧನ ಕಾರ್ಯದಲ್ಲಿ ಭಾಗಿಗಳಾಗಿ ಮೂರ್ತಿಯನ್ನು ಮೇಲಕ್ಕೆ ಎತ್ತಿ ಸಹಾಯ ಸಲ್ಲಿಸಿದ ಶ್ರೀ ಹೊಳೆಯಪ್ಪನಾಯ್ಕರ, ಬೆಳಧಡಿ ಹಾಗೂ ಗದುಗಿನ ಆ. ಧ. ಕಟ್ಟಿಮನಿ ಅವರಿಗೂ ನಾನು ಚಿರಋಣಿಯಾಗಿದ್ದೇನೆ).

ಬೆಳಧಡಿ ಅಪರೂಪದ ನಂದಿ ವಿಗ್ರಹ:





3 ತ. ಸು. ಶಾಮರಾಯ., ಶಿವಶರಣರ ಕಥಾರತ್ನಕೋಶ,(ಮೈಸೂರು.1767) ಪುಟ ೨೦೬-೨೦೭ ರಲ್ಲಿ (ನಂದಿಕೇಶ್ವರ) ಈ ಚರಿತ್ರೆ ನೋಡಿರಿ.